# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 1365 |
| ಸದಸ್ಯರ ಹೆಸರು | : ಶ್ರೀ.ಅರವಿಂದ ಕುಮಾರ ಅರಳಿ<br>(ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕ | : 23.09.2021 |
| ಉತ್ತರಿಸುವ ಸಚಿವರು | : ಮಾನ್ಯ ಜಲಸಂಪನ್ಮೂಲ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಾರಂಜಾ ಡ್ಯಾಂನ ಹಿನ್ನೀರಿನಿಂದ ರೈತರ ಹೊಲ ಗದ್ದೆಗಳಿಗೆ ನೀರು ತುಂಬಿ ಬೆಳೆ ಹಾನಿಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಎಷ್ಟು ಎಕರೆ ಬೆಳೆ ಹಾನಿಯಾಗಿದೆ. | ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br><br>ಕಾರಂಜಾ ಅಣೆಕಟ್ಟಿನ ಹಿನ್ನೀರಿನಿಂದ ರೈತರ 16,058 ಎಕರೆ 05 ಗುಂಟೆ ಜಮೀನು ಮುಳುಗಡೆಯಾಗಿರುತ್ತದೆ. ಇದರಲ್ಲಿ ಈಗಾಗಲೇ 15,522 ಎಕರೆ 25 ಗುಂಟೆ ಜಮೀನಿಗೆ ಭೂ ಪರಿಹಾರವನ್ನು ನೀಡಲಾಗಿದೆ. ಇನ್ನೂ ಬಾಕಿ ಇರುವ 535 ಎಕರೆ 20 ಗುಂಟೆ ಜಮೀನು, ಭೂಸ್ವಾಧೀನ ಪ್ರಕ್ರಿಯೆ ಜಾರಿಯಲ್ಲಿರುತ್ತದೆ. ಮುಳುಗಡೆಯಾದ ರೈತರ ಬೆಳೆಯ ಸರ್ವೆಕೈಗೊಂಡು, ಪರಿಹಾರ ನೀಡುವ ಕುರಿತು ಪರಿಶೀಲನೆಯಲ್ಲಿರುತ್ತದೆ.<br><br>ಕಾರಂಜಾ ಯೋಜನೆಯಡಿ ಭೂಸ್ವಾಧೀನ ಮಾಡಿಕೊಂಡಿರುವ ರೈತರ ಜಮೀನಿಗಿಂತ ಅಧಿಕ ಜಮೀನು ಭಾದಿತವಾಗುವ ಕ್ಷೇತ್ರವನ್ನು ನಿಖರವಾಗಿ ಡ್ರೋಣ್ ಸರ್ವೆ ಮುಖಾಂತರ ಸಮೀಕ್ಷೆ ಮಾಡಲಾಗುತ್ತಿದ್ದು, ಡ್ರೋಣ್ ಸರ್ವೆ ಸಮೀಕ್ಷೆಯ ನಂತರ, ವರದಿಯನ್ನು ಪರಿಶೀಲಿಸಿ, ಪರಿಗಣಿಸಲಾಗುವುದು. |
| ಆ) | ಎಷ್ಟು ಎಕರೆ ರೈತರ ಭೂಮಿ ಹಾನಿಯಾಗಿದ್ದರೆ, ರೈತರಿಗೆ ಪರಿಹಾರವನ್ನು ಯಾವಾಗ ನೀಡಲಾಗುವುದು; ಈ ಬಗ್ಗೆ ಸರ್ಕಾರ ತೆಗೆದುಕೊಂಡ ಕ್ರಮವೇನು; | |
| ಇ) | ಹಿನ್ನೀರಿನಿಂದ ಎಷ್ಟು ಎಕರೆ ರೈತರ ಭೂಮಿಗೆ ನೀರು ಹೋಗಿ ಬೆಳೆ ಹಾನಿಯಾಗುತ್ತಿರುವುದು ಹಲವು ವರ್ಷಗಳಿಂದ ಜರುಗುತ್ತಿದ್ದರೂ ಕೂಡ, ಸರ್ಕಾರ ಈ ಭೂಮಿಗಳನ್ನು ಸ್ವಾಧೀನಪಡಿಸಿಕೊಳ್ಳಲು ಏಕೆ ಮುಂದೆ ಬರುತ್ತಿಲ್ಲ? | |

ಸಂಖ್ಯೆ: ಜಸಂಇ 191 ಎಂಎಲ್ಎ 2021

(ಗೋವಿಂದ ಎಂ. ಕಾರಜೋಳ)
ಜಲಸಂಪನ್ಮೂಲ ಸಚಿವರು.